## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 658 (829) |
| ಸದಸ್ಯರ ಹೆಸರು | : | ಶ್ರೀ ಎಸ್.ಎಲ್ ಭೋಜೇಗೌಡ (ಶಿಕ್ಷಕರ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 15-12-2020 |
| ಉತ್ತರಿಸುವ ಸಚಿವರು | : | ಮಾನ್ಯ ಪೌರಾಡಳಿತ, ತೋಟಗಾರಿಕೆ ಹಾಗೂ ರೇಷ್ಮೆ ಸಚಿವರು. |

| ಕ್ರ. ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕೋವಿಡ್ ಕಾರಣದಿಂದ ಲಾಕ್‌ಡೌನ್ ಹೇರಲ್ಪಟ್ಟ ಸಂಧರ್ಭದಲ್ಲಿ ರಾಜ್ಯದ ವಿವಿಧ ನಗರಗಳ ರಸ್ತೆ ಕಾಮಗಾರಿಗಳು ನೆನೆಗುದಿಗೆ ಬಿದ್ದಿದ್ದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹಾಗಿದ್ದಲ್ಲಿ, ಅಪೂರ್ಣಗೊಂಡ ಕಾಮಗಾರಿಗಳ ಸಂಪೂರ್ಣ ಮಾಹಿತಿ ನೀಡುವುದು; | <u>ಸರ್ಕಾರದ ಗಮನಕ್ಕೆ ಬಂದಿರುತ್ತದೆ</u><br><br>ರಾಜ್ಯದ ವಿವಿಧ ನಗರ ಸ್ಥಳೀಯ ಸಂಸ್ಥೆಗಳಿಗೆ ಮಂಜೂರಾಗಿ ಅನುಷ್ಠಾನದಲ್ಲಿದ್ದ ಕಾಮಗಾರಿಗಳು ಕೋವಿಡ್-19 ರ ಕಾರಣದಿಂದ ಲಾಕ್‌ಡೌನ್ ಹೇರಲ್ಪಟ್ಟ ಸಂದರ್ಭದಲ್ಲಿ ಸ್ಥಗಿತವಾಗಿರುತ್ತದೆ. ಆದರೆ ಲಾಕ್‌ಡೌನ್ ತೆರವುಗೊಂಡ ನಂತರ ಪ್ರಗತಿಯಲ್ಲಿದ್ದ ಕಾಮಗಾರಿಗಳನ್ನು ಮುಂದುವರಿಸಲಾಗಿರುತ್ತದೆ. |
| (ಆ) | ರಾಜ್ಯದ ಮುಖ್ಯ ನಗರಗಳಲ್ಲಿ ಕೋವಿಡ್ ಸಂದರ್ಭದಲ್ಲಿ ತಡೆಹಿಡಿಯಲಾಗಿದ್ದ ಕಾಮಗಾರಿಗಳಿಂದ ರಾಜ್ಯದ ಬೊಕ್ಕಸಕ್ಕೆ ಉಳಿತಾಯವಾಗಿದೆಯೇ; (ವಿವರದೊಂದಿಗೆ ಮಾಹಿತಿ ನೀಡುವುದು) | ನಗರೋತ್ಥಾನ ಯೋಜನೆ, 14 ನೇ ಹಣಕಾಸು ಯೋಜನೆ ಮತ್ತು ಎಸ್.ಎಫ್.ಸಿ ಮುಕ್ತನಿಧಿ ಯೋಜನೆಯ ಕಾಮಗಾರಿಗಳು ಕೋವಿಡ್-19ರ ಕಾರಣದಿಂದಾಗಿ ಲಾಕ್‌ಡೌನ್ ಸಂದರ್ಭದಲ್ಲಿ ಸ್ಥಗಿತಗೊಂಡಿದ್ದು, ಆದರೆ ಲಾಕ್‌ಡೌನ್ ತೆರವುಗೊಂಡ ನಂತರ ಯಥಾಸ್ಥಿತಿಯಲ್ಲಿ ಕಾಮಗಾರಿಗಳನ್ನು ಕೈಗೊಳ್ಳಲಾಗುತ್ತಿರುವುದರಿಂದ, ರಾಜ್ಯದ ಬೊಕ್ಕಸಕ್ಕೆ ಉಳಿತಾಯವಾಗಿರುವುದಿಲ್ಲ. |
| (ಇ) | ಕೆಲವು ರಸ್ತೆ ಮತ್ತು ಮೂಲಸೌಕರ್ಯ ಕಾಮಗಾರಿಯ ಗುತ್ತಿಗೆದಾರರು ನಗರಾಭಿವೃದ್ಧಿಯ ವಿವಿಧ ಯೋಜನೆಗಳಲ್ಲಿ ಕಳಪೆ ಗುಣಮಟ್ಟದ ಕಾಮಗಾರಿ ನಿರ್ವಹಿಸಿ ಬಿಲ್ ಪಾವತಿ ಮಾಡಿಸಿಕೊಳ್ಳುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ ಆ ಗುತ್ತಿಗೆದಾರರ ವಿರುದ್ಧ ಸರ್ಕಾರ ಯಾವ ಕ್ರಮ ಕೈಗೊಳ್ಳಲಿದೆ? (ವಿವರ ನೀಡುವುದು) | ನಗರೋತ್ಥಾನ ಯೋಜನೆಯ ಕಾಮಗಾರಿಗಳ ಗುಣಮಟ್ಟದ ಮೇಲ್ವಿಚಾರಣೆಗಾಗಿ ಯೋಜನಾ ಅನುಷ್ಠಾನ ಸಮಾಲೋಚಕರನ್ನು (Project Implementation Consultants) ನೇಮಕ ಮಾಡಲಾಗಿರುತ್ತದೆ. 14 ನೇ ಹಣಕಾಸು ಯೋಜನೆ ಮತ್ತು ಎಸ್.ಎಫ್.ಸಿ ಮುಕ್ತನಿಧಿ ಯೋಜನೆಯಡಿಯಲ್ಲಿ ಪೂರ್ಣಗೊಂಡ ಕಾಮಗಾರಿಗಳ ತಪಾಸಣಾ ವರದಿಗೆ 3ನೇ ವ್ಯಕ್ತಿಯನ್ನು ನೇಮಿಸಲಾಗಿರುತ್ತದೆ. ಸದರಿಯವರು ಕಾಮಗಾರಿಗಳ ಗುಣಮಟ್ಟದ ವರದಿಯನ್ನು ನೀಡಿದ ನಂತರವೇ ಗುತ್ತಿಗೆದಾರರಿಗೆ ಬಿಲ್ ಪಾವತಿಸಲು ಕ್ರಮವಹಿಸಲಾಗುತ್ತಿದೆ. ಮುಂದುವರೆದು, ಕಳಪೆ ಗುಣಮಟ್ಟದ ಕಾಮಗಾರಿ ಪ್ರಕರಣಗಳು ಕಂಡು ಬಂದಲ್ಲಿ, ಅಂತಹ ಗುತ್ತಿಗೆದಾರರ ವಿರುದ್ಧ ನಿಯಮಾನುಸಾರ ಕ್ರಮ ಜರುಗಿಸಲಾಗುವುದು. |

ಕಡತ ಸಂಖ್ಯೆ:ನಅಇ 427 ಎಸ್.ಎಫ್.ಸಿ 2020

(ಡಾ|| ನಾರಾಯಣ ಗೌಡ)
ಪೌರಾಡಳಿತ, ತೋಟಗಾರಿಕೆ ಹಾಗೂ
ರೇಷ್ಮೆ ಸಚಿವರು